



# ಹೊಂಗನಸು



ಬಿ.ಎಂ.ಶ್ರೀ ಪ್ರತಿಷ್ಠಾನದ ವಾರ್ತಾಪತ್ರ

ಹೊಂಗನಸು – 56

| ಸಂಪುಟ: ೦೬ ಸಂಚಿಕೆ: ೬ | ಸೆಪ್ಟೆಂಬರ್ ೨೦೧೯ | ಪುಟಗಳು ೮ | ವಾರ್ಷಿಕ ಚಂದ ರೂ. ೨೦/– | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್ |
|---|---|---|---|---|
| Vol. 06 Issue 6 | September 2019 | Pages - 8 | A. Sub. - Rs. 20/- | Editor : Sri. B.R. Ravindranath |




ವಿಳಾಸ
ಬಿ.ಎಂ.ಶ್ರೀ. ಪ್ರತಿಷ್ಠಾನ
ಸ್ಥಾಪನೆ : ೦೬–೦೫–೧೯೭೯
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ದೂರವಾಣಿ:೨೬೬೧೫೮೭೭, ೨೬೬೭೬೭೭೩
ಇಮೇಲ್ : bmsritrust@gmail.com
web: www.bmshri.org
ಕಛೇರಿ ಸಮಯ:
ಮಧ್ಯಾಹ್ನ 12–30ರಿಂದ ಸಂಜೆ 7–30ಗಂಟೆ.
ವಾರದ ರಜೆ: ಮಂಗಳವಾರ

೦೮–೦೮–೨೦೧೯

## ಹಳಗನ್ನಡ ಮತ್ತು ಶಾಸನ ಲಿಪಿ–ಕಲಿಕೆ ತರಗತಿಗಳ ಉದ್ಘಾಟನೆ

ಪ್ರತಿಷ್ಠಾನವು ತನ್ನ ನಲವತ್ತನೇ ಸಂವತ್ಸರದ ಸಂಭ್ರಮದಲ್ಲಿದೆ ಪ್ರತಿ ವರ್ಷವೂ ಹಳಗನ್ನಡ ಡಿಪ್ಲೊಮಾ ತರಗತಿಗಳನ್ನು ನಡೆಸಿಕೊಂಡು ಬರುತ್ತಿದೆ. ಈ ವರ್ಷ ಶಾಸನ ಕಲಿಕೆಯನ್ನೂ ಪಠ್ಯದಲ್ಲಿ ಸೇರಿಸಲಾಗಿದೆ. ಹಳಗನ್ನಡ ಕಲಿಯುವಿಕೆಗೆ ಶಾಸನ ಪಠ್ಯವು ಮೆರಗು ತಂದು ಕೊಡುತ್ತದೆ. ಆ ಕಾರಣದಿಂದ ಶಾಸನ ಕಲಿಕೆಯೆಂಬ ವಿಷಯವನ್ನು ಪಠ್ಯದಲ್ಲಿ ಅಳವಡಿಸಲಾಗಿದೆ.

ತರಗತಿಯನ್ನು ನಿವೃತ್ತ ಭಾಷಾ ವಿದ್ವಾಂಸರಾದ ಡಾ|| ಕೃಷ್ಣ ಪರಮೇಶ್ವರ ಭಟ್ ಅವರು ಉದ್ಘಾಟಿಸಿದರು. ಡಾ. ಆರ್. ಲಕ್ಷ್ಮೀನಾರಾಯಣ ಅವರು ಹಳಗನ್ನಡ ತರಗತಿಗಳ ಪ್ರಾರಂಭೋತ್ಸವದ ಹಿನ್ನೆಲೆ ಹಾಗೂ ಉದ್ದೇಶಗಳನ್ನು ತಿಳಿಸಿ ಎಲ್ಲರನ್ನೂ ಸ್ವಾಗತಿಸಿದರು. ವಿದ್ಯಾರ್ಥಿಗಳು ವಿವಿಧ ಕಾರ್ಯಕ್ಷೇತ್ರಗಳಿಂದ ಬಂದಿರುವುದನ್ನು ತಿಳಿದು ಡಾ. ಕೃಷ್ಣ ಪರಮೇಶ್ವರ ಭಟ್ಟ ಅವರು ಬಹಳ ಸಂತೋಷವನ್ನು ವ್ಯಕ್ತಪಡಿಸಿದರು. ನಮ್ಮ ಪರಂಪರೆ, ಸ್ಥಳನಾಮಗಳನ್ನು ಅಧ್ಯಯನ ಮಾಡುವುದರಲ್ಲಿ ಹಳಗನ್ನಡದ ಮಹತ್ವವನ್ನು ಕೆಲವು ಉದಾಹರಣೆಗಳೊಂದಿಗೆ ತಮ್ಮ ವಿಚಾರವನ್ನು ಹಂಚಿಕೊಂಡು, ವಿದ್ಯಾರ್ಥಿಗಳಿಗೆ ಶುಭಹಾರೈಸಿದರು.

ಅಧ್ಯಾಪಕರುಗಳ ಪರವಾಗಿ ಮಾತನಾಡಿದ ಪ್ರೊ. ಜಿ. ಅಶ್ವತ್ಥನಾರಾಯಣ ಅವರು ತರಗತಿಗಳ ಬಗ್ಗೆ ಕಿರುಪರಿಚಯ ನೀಡಿದರು. ನಮ್ಮ ಪೂರ್ವಕವಿಗಳನ್ನು ಮತ್ತು ಅವರ ಕಾವ್ಯಗಳನ್ನು ಅರಿಯಲು, ಹಳಗನ್ನಡದ ಅಗತ್ಯತೆ ಕುರಿತು ಸೋದಾಹರಣವಾಗಿ ಕೆಲವು ಸಂಧರ್ಭಗಳ್ನು ವಿವರಿಸಿದರು. ವಿದ್ಯಾರ್ಥಿಗಳಿಗೆ ಪಠ್ಯಪುಸ್ತಕಗಳನ್ನು ಈ ಸಮಾರಂಭದಲ್ಲಿ ವಿತರಿಸಲಾಯಿತು.

ಡಾ|| ವಿಜಯಾ ಸುಬ್ಬರಾಜ್ ಅವರು ವಂದನಾರ್ಪಣೆ ಸಲ್ಲಿಸಿದರು.



## ಶ್ರೀಮತಿ ಸಾವಿತ್ರಮ್ಮ– ಪ್ರೊ. ಎಂ. ವಿ. ಸೀ ಪ್ರಶಸ್ತಿ

ಎಂ. ವಿ. ಸೀ ಅವರ ಮಕ್ಕಳು ಸ್ಥಾಪಿಸಿ ಬಿ.ಎಂ.ಶ್ರೀ. ಪ್ರತಿಷ್ಠಾನವು ಕೊಡಮಾಡುತ್ತ ಬಂದಿರುವ ಸಾವಿತ್ರಮ್ಮ– ಪ್ರೊ. ಎಂ. ವಿ. ಸೀ ಪ್ರಶಸ್ತಿಗೆ ಈ ವರ್ಷ(೨೦೧೯) ಶ್ರೀ ಟಿ. ಎಸ್. ದಕ್ಷಿಣಾಮೂರ್ತಿ ಮತ್ತು ಎನ್. ಎಸ್. ಶ್ರೀಧರಮೂರ್ತಿ ಅವರ ಆಯ್ಕೆ ಸಮಿತಿಯು ಖ್ಯಾತ ಕಾದಂಬರಿಕಾರ. ಕತೆಗಾರ, ಕವಿ ಡಾ. ನಾ. ಮೊಗಸಾಲೆಯವರನ್ನು ಆಯ್ಕೆ ಮಾಡಿದೆ. ಶ್ರೀಮತಿ ಸಾವಿತ್ರಮ್ಮ –ಪ್ರೊ.ಎಂವಿ.ಸೀ ಪ್ರಶಸ್ತಿಯನ್ನು ಸಾಹಿತ್ಯ, ಸಂಶೋಧನೆ, ಮತ್ತು ನಾಡು ನುಡಿಯ ಸಂಘಟನೆಯ ಕ್ಷೇತ್ರಗಳಲ್ಲಿ ಮಹತ್ವದ ಕೊಡುಗೆ ನೀಡಿದವರಿಗೆ ಒಂದೊಂದು ವರ್ಷ ಕೊಡುತ್ತಿದ್ದು, ಈ ಸಲ 'ಕಾಂತಾವರ ಕನ್ನಡ ಸಂಘ'ವನ್ನು ಕಟ್ಟಿ ಬೆಳೆಸಿದ ಡಾ.ನಾ. ಮೊಗಸಾಲೆಯವರಿಗೆ ಸಂದಿದೆ.

### ಡಾ. ನಾ. ಮೊಗಸಾಲೆ



ಡಾ. ನಾ. ಮೊಗಸಾಲೆಯವರು '<u>ಕಾಂತಾವರ ಕನ್ನಡ ಸಂಘ</u>'ವನ್ನು ಕಟ್ಟಿಬೆಳೆಸಿದ್ದು ಕನ್ನಡ ಸಾಂಸ್ಕೃತಿಕ ಜಗತ್ತಿನಲ್ಲಿ ವಿಶೇಷ ಉಲ್ಲೇಖಕ್ಕೆ ಅರ್ಹವಾದದ್ದು. ಕಾಂತಾವರದಂಥ ಕುಗ್ರಾಮ ಇಂದು ಕರ್ನಾಟಕದ ಸಾಂಸ್ಕೃತಿಕ ಜಗತ್ತಿನಲ್ಲಿ ಹೆಸರು ಮಾಡಿದ್ದರೆ, ಅದಕ್ಕೆ ಕಾರಣರಾದವರು ಡಾ.ನಾ. ಮೊಗಸಾಲೆ. ೧೯೭೬ ರಲ್ಲಿ ಕನ್ನಡ ಸಂಘವನ್ನು ಹುಟ್ಟುಹಾಕಿ, ಅದಕ್ಕೆ ತನು, ಮನ, ಧನ, ಅಂತಃಕರಣಪೂರ್ವಕವಾಗಿ ನೀರೆರೆದು ಬೆಳೆಸಿ ಪೋಷಿಸುವ ಮೂಲಕ ಇಂದು ಸಾಹಿತ್ಯ ಸಾಂಸ್ಕೃತಿಕ ಚಟುವಟಿಕೆಗಳ ಬೃಹತ್ ವಟವೃಕ್ಷವಾಗಿ ಬೆಳೆದು ನಿಲ್ಲುವಂತೆ ಮಾಡಿದ ಶ್ರೀಯುತರು ಮಹಾನ್ ಸಂಘಟಕರು. ಕನ್ನಡದ ಶ್ರೇಷ್ಠ ಬರಹಗಾರರಾಗಿ ಮೊಗಸಾಲೆಯವರು ಇದುವರೆಗೆ ಹದಿನೆಂಟು ಕಾದಂಬರಿಗಳು, ಹತ್ತು ಕವನ ಸಂಕಲನಗಳು, ಆರು ಕಥಾ ಸಂಕಲನಗಳು ಮತ್ತು ಇತರೆ ಕೃತಿಗಳು ಸೇರಿ ಒಟ್ಟು ೭೦ ಕೃತಿಗಳನ್ನು ರಚಿಸಿದ್ದಾರೆ. ಅವರ ಕೆಲವು ಕೃತಿಗಳು ಹಿಂದಿ, ಮಲೆಯಾಳಂ, ತೆಲುಗು ಭಾಷೆಗಳಿಗೆ ಅನುವಾದವಾಗಿವೆ. ಅವರಿಗೆ ಕರ್ನಾಟಕ ಸಾ. ಅಕಾಡೆಮಿಯ ಪುಸ್ತಕ ಬಹುಮಾನ, ಮಾಸ್ತಿ ಪ್ರಶಸ್ತಿ, ಗಳಗನಾಥ ಪ್ರಶಸ್ತಿ, ಶಿವರಾಮ ಕಾರಂತ ಪ್ರಶಸ್ತಿ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಬಸವಶ್ರೀ ಪ್ರಶಸ್ತಿ, ಪಂಪ ಪ್ರಶಸ್ತಿ ಮೊದಲಾದ ಪ್ರತಿಷ್ಠಿತ ಪ್ರಶಸ್ತಿಗಳು ಬಂದಿವೆ. ಇದೀಗ ಶ್ರೀಮತಿ ಸಾವಿತ್ರಮ್ಮ– ಪ್ರೊ. ಎಂ. ವಿ. ಸೀ ಪ್ರಶಸ್ತಿಗಾಗಿ ಆಯ್ಕೆಯಾಗಿರುವುದಕ್ಕೆ ಪ್ರತಿಷ್ಠಾನವು ಅವರನ್ನು ಹೃತ್ಪೂರ್ವಕವಾಗಿ ಅಭಿನಂದಿಸುತ್ತದೆ.

### ಮಾವಿನಕೆರೆ ರಂಗನಾಥ್

ಖ್ಯಾತ ಪತ್ರಕರ್ತ ಮತ್ತು ಲೇಖಕರಾದ ಶ್ರೀ ಮಾವಿನಕೆರೆ ರಂಗನಾಥ್ ಅವರು ೧೯೪೩ ರಲ್ಲಿ ಹಿರಿಯೂರಿನಲ್ಲಿ ಹುಟ್ಟಿದವರು. ಕನ್ನಡದ ಶ್ರೇಷ್ಠ ಕಥೆಗಾರ ಮತ್ತು ಕಾದಂಬರಿಕಾರರಾದ ರಂಗನಾಥ್ ಅವರು ರುಕ್ಮಿಣಿ, ಚಕ್ರಬಂಧನ, ಪರ್ಜನ್ಯ, ಮಿಥುನ (ಸಣ್ಣ ಕಥೆ), ಏಳುಸುತ್ತಿನ ಕೋಟೆ, ಜಲತರಂಗ(ಕಾದಂಬರಿಗಳು) ಕೃತಿಗಳನ್ನು ರಚಿಸಿರುವುದಲ್ಲದೆ, ಮಾಸ್ತಿ ಸಮಗ್ರ ಕಥೆಗಳು (೨ ಭಾಗ) ಸಂಪಾದಿಸಿದ್ದಾರೆ. ಗೋಪಾಲ ಕೃಷ್ಣ ಅಡಿಗರೊಂದಿಗೆ ನೊಬೆಲ್ ಸಣ್ಣಕಥೆಗಳು, ಕಥಾ ಜಗತ್ತು, ನೊಬೆಲ್ ಪ್ರಶಸ್ತಿ ವಿಜೇತರ ಕವಿತೆಗಳು, ಕಾವ್ಯ ಜಗತ್ತು ಕೃತಿಗಳನ್ನು ಸಂಪಾದಿಸಿದ್ದಾರೆ.

# ಪ್ರೊ. ಎಂ. ವಿ. ಸೀತಾರಾಮಯ್ಯ –ಬದುಕು – ಒಂದು ನೋಟ – ೬

ಕನ್ನಡ ನಾಡಿನಲ್ಲಿ ಕನ್ನಡ ಭಾಷೆಯ ಕುರಿತಂತೆ ಅನೇಕ ಚಳುವಳಿಗಳು ನಡೆದಿವೆ: ಅದು ಕನ್ನಡ ಮಾತನಾಡುವ ಪ್ರದೇಶಗಳ ಏಕೀಕರಣ, ಕನ್ನಡ ಚಲನಚಿತ್ರಗಳಿಗೆ ಪ್ರೋತ್ಸಾಹ, ಪ್ರೌಢಶಾಲೆಗಳಲ್ಲಿನ ಕಲಿಕೆಯ ಭಾಷೆಗಳ ಸ್ವರೂಪ, ದೂರದರ್ಶನದಲ್ಲಿ ಕನ್ನಡ ಬಳಕೆ, ಇತ್ಯಾದಿಗಳಿಗೆ ಸಂಬಂಧಿಸಿದವು. ೧೯೮೦ ರ ದಶಕದಲ್ಲಿ ನಡೆದ ಚಳುವಳಿಯೇ 'ಗೋಕಾಕ್ ಚಳುವಳಿ'. ಆಗ ಪ್ರೌಢಶಾಲೆಗಳಲ್ಲಿ ಮೊದಲನೆಯ ಭಾಷೆಯಾಗಿ ಆರಿಸಿಕೊಳ್ಳಬಹುದಾದವುಗಳಲ್ಲಿ ಸಂಸ್ಕೃತದಂತಹ ಗ್ರಾಂಥಿಕ ಭಾಷೆಯೂ ಸೇರಿತ್ತು. ಸಂಸ್ಕೃತದ ಕಲಿಕೆ ಪ್ರೌಢಶಾಲೆಯಲ್ಲಿಯೇ ಆರಂಭವಾದರೂ ವಿದ್ಯಾರ್ಥಿಗಳಲ್ಲಿ ಬಹುಮಂದಿ ಅದನ್ನು ಆಯ್ಕೆಮಾಡಿಕೊಳ್ಳುತ್ತಿದ್ದುದು ಸುಲಭವಾಗಿ ಹೆಚ್ಚು ಅಂಕಗಳನ್ನು ಪಡೆಯಬಹುದೆಂಬ ಹೆಬ್ಬಯಕೆಯಿಂದ. ಯಾಕೆಂದರೆ ಸಂಸ್ಕೃತವನ್ನು ಪಾಠ ಮಾಡುತ್ತಿದ್ದುದೂ, ಪರೀಕ್ಷೆಗಳಲ್ಲಿ ವಿದ್ಯಾರ್ಥಿಗಳು ಉತ್ತರ ಬರೆಯಲು ಆರಿಸಿಕೊಳ್ಳುತ್ತಿದ್ದುದೂ ಕನ್ನಡವನ್ನೇ. ಹೀಗಾಗಿ ಸಂಸ್ಕೃತವನ್ನು ಕಲಿಯದೆಯೇ ಹೆಚ್ಚು ಅಂಕ ಪಡೆಯುವ ಪ್ರಲೋಭನೆ ವಿದ್ಯಾರ್ಥಿಗಳು ಕನ್ನಡವನ್ನು ಕಡೆಗಣಿಸಲು ಕಾರಣವಾಗುತ್ತಿತ್ತು. ಇದರಿಂದ ಹಲವರು **'ಕನ್ನಡ ಉಳಿಸಿ'** ಚಳವಳಿ ಆರಂಭಿಸಿದರು. ಸಮಸ್ಯೆಯ ಗಾಂಭೀರ್ಯ ವನ್ನು ಅರ್ಥಮಾಡಿಕೊಂಡ ಕರ್ನಾಟಕ ಸರ್ಕಾರ ಪ್ರೌಢಶಾಲೆಗಳಲ್ಲಿ ಕಲಿಸಬೇಕಾದ ಭಾಷೆಗಳ ಸ್ವರೂಪವನ್ನು ಶಿಫಾರಸು ಮಾಡಲು ಪ್ರೊ.ವಿ.ಕೆ.ಗೋಕಾಕ್ ಅವರ ಅಧ್ಯಕ್ಷತೆಯಲ್ಲಿ ಸಮಿತಿಯೊಂದನ್ನು ರಚಿಸಿತು. ಸಮಿತಿ ನಾಡಿನೆಲ್ಲೆಡೆ ಸುತ್ತಿ ಕೊನೆಗೆ ಒಂದು ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿತು. ಅದರ ಪ್ರಕಾರ ಕನ್ನಡ ನಾಡಿನ ಸರ್ಕಾರ ಮಾನ್ಯ ಮಾಡಿದ ಎಲ್ಲ ಶಾಲೆಗಳಲ್ಲಿ ಕನ್ನಡವು ಏಕೈಕ ಪ್ರಥಮ ಭಾಷೆಯಾಗಬೇಕು. ಕೆಲ ವರ್ಗಗಳಿಂದ ಇದಕ್ಕೆ ವಿರೋಧ ವ್ಯಕ್ತವಾದ ಕಾರಣ ವರದಿಯನ್ನು ಅನುಷ್ಠಾನಗೊಳಿಸಲು ಸರ್ಕಾರ ಹಿಂದೇಟು ಹಾಕಿತು. ಇದರಿಂದ ರೊಚ್ಚಿಗೆದ್ದ ಕನ್ನಡ ಜನತೆ ನಾಡಿನಾದ್ಯಂತ ದೊಡ್ಡ ಚಳುವಳಿಯನ್ನು ದೀರ್ಘಕಾಲ ನಡೆಸಿತು. ಅದು 'ಗೋಕಾಕ್ ಚಳವಳಿ' ಎಂದೇ ಪ್ರಸಿದ್ಧವಾಯಿತು. ಮುಖ್ಯವಾಗಿ ಧಾರವಾಡ, ಮೈಸೂರು ಮತ್ತು ಬೆಂಗಳೂರುಗಳನ್ನು ಕೇಂದ್ರಗಳಾಗಿ ಹೊಂದಿ ಎಲ್ಲಡೆ ಚಳವಳಿ ಪಸರಿಸಿತು. (ಮುಂದುವರಿಯುತ್ತದೆ )

### ಸೆಪ್ಟೆಂಬರ್ ತಿಂಗಳಿನಲ್ಲಿ ಜನಿಸಿದ ಸಾಹಿತ್ಯೋಪಾಸಕರು

| | |
|---|---|
| ಕೆ.ಪಿ. ಪೂರ್ಣಚಂದ್ರ ತೇಜಸ್ವಿ | ೮–೯–೧೯೩೮ |
| ದಿನಕರ ದೇಸಾಯಿ | ೧೦–೯–೧೯೦೯ |
| ಶ್ರೀರಂಗ | ೨೬–೯–೧೯೦೪ |
| ನಿರುಪಮಾ | ೩೦–೯–೧೯೩೧ |

### ಸೆಪ್ಟೆಂಬರ್ ತಿಂಗಳಿನಲ್ಲಿ ನಿಧನರಾದ ಸಾಹಿತ್ಯೋಪಾಸಕರು

| | |
|---|---|
| ಸಿದ್ಧಯ್ಯ ಪುರಾಣಿಕ | ೫–೯–೧೯೯೩ |
| ಎಂ. ಗೋವಿಂದ ಪೈ | ೧೦–೯–೧೯೬೩ |
| ತೀ. ನಂ. ಶ್ರೀಂಠಯ್ಯ | ೭–೯–೧೯೬೬ |
| ಎಂ.ಆರ್. ಶ್ರೀನಿವಾಸ ಮೂರ್ತಿ | ೧೬–೯–೧೯೫೩ |
| ತಿರುಮಲೆ ರಾಜಮ್ಮ | ೨೪–೯–೧೯೮೪ |
| ಶಂಬಾಜೋಶಿ | ೧೮–೯–೧೯೯೧ |

# ಸೆಪ್ಟೆಂಬರ್ ೨೦೧೯ ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು

## ಸ್ಥಳ : ಎಂ.ವಿ.ಸೀ. ಸಭಾಂಗಣ, ಬಿ.ಎಂ.ಶ್ರೀ. ಪ್ರತಿಷ್ಠಾನ




### ದಿನಾಂಕ : ೦೯ -೦೯-೨೦೧೯ ಸೋಮವಾರ ಸಂಜೆ- ೫-೩೦ಗಂಟೆಗೆ

**“ಅಕ್ಕರಗೊಟ್ಟಿ”-೫೪**

ತಿಂಗಳ ಮುಕ್ತ ಸಂಸ್ಕೃತಿಚಿಂತನೆ

ವಿಷಯ :. ಶಿಕ್ಷಣ ಮತ್ತು ಭಾಷೆ : ಕೆಲವು ಪ್ರಶ್ನೆಗಳು

ಚಾಲನೆ ನೀಡುವವರು : ಡಾ.ಎಚ್.ಎನ್. ಮುರಳೀಧರ್, ನಿವೃತ್ತ ಕನ್ನಡ ಪ್ರಾಧ್ಯಾಪಕರು

### ದಿನಾಂಕ : ೧೫-೦೯-೨೦೧೯ ಭಾನುವಾರ ಬೆಳಗ್ಗೆ -೧೦.೩೦ಕ್ಕೆ

**ಶ್ರೀಮತಿ ಸಾವಿತ್ರಮ್ಮ -ಪ್ರೊ॥ ಎಂ.ವಿ.ಸೀ. ಸಾಹಿತ್ಯ ಪುರಸ್ಕಾರ**

ಪ್ರಶಸ್ತಿ ಪುರಸ್ಕೃತರು : ಡಾ. ನಾ. ಮೊಗಸಾಲೆ.

ಅಭಿನಂದನಾ ಭಾಷಣ : ಪುಂಡೀಕಾಯ್ ಗಣಪತಿ ಭಟ್

ಅಧ್ಯಕ್ಷತೆ ಹಾಗೂ ಪ್ರಶಸ್ತಿ ಪ್ರದಾನ : ಡಾ. ಮಾವಿನಕೆರೆರಂಥನಾಥನ್

### ದಿನಾಂಕ : ೨೬-೦೯-೨೦೧೯ ಗುರುವಾರ ಸಂಜೆ : ೫-೦೦ ಗಂಟೆಗೆ

**ನುಡಿಯಾರಾಧಕರ ಸ್ಮರಣೆ ಕಾರ್ಯಕ್ರಮ**

ಎಂ.ಆರ್. ಶ್ರೀನಿವಾಸ ಮೂರ್ತಿ, ಕೆ.ಪಿ. ಪೂರ್ಣಚಂದ್ರ ತೇಜಸ್ವಿ, ದಿನಕರ ದೇಸಾಯಿ, ಶ್ರೀರಂಗ, ತೀ.ನಂ.ಶ್ರೀಂಠಯ್ಯ, ತಿರುಮಲೆ ರಾಜಮ್ಮ, ಶಂಬಾಜೋಶಿ ಅವರುಗಳ ಬದುಕು ಬರಹಗಳ ಬಗ್ಗೆ ವಿಚಾರ ಮಂಡನೆ ಸಾಹಿತ್ಯಾಭಿಮಾನಿಗಳಿಂದ



### ದಿನಾಂಕ : ೩೦-೦೯-೨೦೧೯ ಸೋಮವಾರ ಸಂಜೆ – ೫.೩೦ಕ್ಕೆ

**ಶಂ.ಬಾ.ಜೋಶಿ ದತ್ತಿ ಕಾರ್ಯಕ್ರಮ**

ವಿಷಯ : ಶಂ.ಬಾ. ಅವರ ಕನ್ನಡ ಪ್ರಜ್ಞೆಯ ನೆಲೆಗಳು

ಉಪನ್ಯಾಸಕರು : ಡಾ. ಮಲ್ಲೇಪುರಂ. ಜಿ. ವೆಂಕಟೇಶ್

ಖ್ಯಾತ ವಿದ್ವಾಂಸರು, ನಿವೃತ್ತ ಕುಲಪತಿಗಳು, ಸಂಸ್ಕೃತ ವಿಶ್ವವಿದ್ಯಾಲಯ

## ರಾಷ್ಟ್ರಪತಿ ಪ್ರಶಸ್ತಿ ವಿಜೇತ ಸಾಧಕರು

### ಶ್ರೀ ಎಸ್. ಕಾರ್ತಿಕ್



ಭಾಷಾ ಕ್ಷೇತ್ರಕ್ಕೆ ವಿಶೇಷ ಕೊಡುಗೆ ನೀಡಿದ ಸಾಧಕರನ್ನು ಗುರುತಿಸಿ, ಕೇಂದ್ರ ಸರ್ಕಾರ “ಮಹರ್ಷಿ ಬಾದರಾಯಣ ವ್ಯಾಸ ಸಮ್ಮಾನ್” ಪ್ರಶಸ್ತಿಯನ್ನು ನಮ್ಮ ಪ್ರತಿಷ್ಠಾನದೊಂದಿಗೆ ಭಾಷಾ ಕ್ಷೇತ್ರಕ್ಕೆ ನಿಕಟ ಸಂಬಂಧ ಹೊಂದಿರುವ ಮತ್ತು ಯುವ ಸಂಶೋಧಕರಾದ ಶ್ರೀ ಎಸ್. ಕಾರ್ತಿಕ್ ಅವರಿಗೆ ನೀಡಿ ಗೌರವಿಸಿದೆ. ಈ ಗೌರವಕ್ಕೆ ಪಾತ್ರರಾದ ಶ್ರೀ ಕಾರ್ತಿಕ್ ಅವರಿಗೆ ಅಭಿನಂದನೆಗಳನ್ನು ತಿಳಿಸುತ್ತಾ, ಇನ್ನೂ ಹೆಚ್ಚಿನ ಸಾಧನೆಗಳನ್ನು ಮಾಡಲೆಂದು ಪ್ರತಿಷ್ಠಾನ ಹಾರೈಸುತ್ತದೆ.

### ಶ್ರೀ ಜಿ.ಬಿ.ಹರೀಶ್



ಶ್ರೀ ಜಿ.ಬಿ.ಹರೀಶ್ ಪ್ರತಿಷ್ಠಾನದ ಸದಸ್ಯರು, ಸಂಸ್ಕೃತಿ ಚಿಂತಕರು ಹಾಗೂ ಅಂಕಣಗಾರ ವಿಶೇಷ ಕೊಡುಗೆ ನೀಡಿದ ಸಾಧಕರನ್ನು ಗುರುತಿಸಿ, ಕೇಂದ್ರ ಸರ್ಕಾರ “ಮಹರ್ಷಿ ಬಾದರಾಯಣ ವ್ಯಾಸ ಸಮ್ಮಾನ್ ” ಪ್ರಶಸ್ತಿಯನ್ನು ನೀಡಿ ಗೌರವಿಸಿದೆ. ಈ ಗೌರವಕ್ಕೆ ಪಾತ್ರರಾದ ಡಾ.ಜಿ.ಬಿ.ಹರೀಶ್ ಅವರಿಗೆ ಅಭಿನಂದನೆಗಳನ್ನು ತಿಳಿಸುತ್ತಾ, ಇನ್ನೂ ಹೆಚ್ಚಿನ ಸಾಧನೆಗಳನ್ನು ಮಾಡಲೆಂದು ಪ್ರತಿಷ್ಠಾನ ಹಾರೈಸುತ್ತದೆ.

## ಸೇವಾ ಶುಲ್ಕ ಕಡಿತ

ಸಂಘ ಸಂಸ್ಥೆಗಳು ನಡೆಸುವ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸಲು ಅನುಕೂಲ ಮಾಡಿಕೊಡಲು ಬಿ.ಎಂ.ಶ್ರೀ ಪ್ರತಿಷ್ಠಾನದ ಸಭಾಂಗಣಗಳ ಸೇವಾ ಶುಲ್ಕಗಳನ್ನು ಗಣನೀಯವಾಗಿ ಕಡಿತಗೊಳಿಸಲಾಗಿದೆ ವಿವರಗಳಿಗೆ ಕಚೇರಿಯನ್ನು ಸಂಪರ್ಕಿಸಿ.

ದೂರವಾಣಿ : 26615877 / 26676773

# ಬಿ.ಎಂ.ಶ್ರೀ ಪ್ರತಿಷ್ಠಾನದ ಕಾರ್ಯಕ್ರಮಗಳು

೭-೮-೨೦೧೯

**ಸಾಕ್ಷ್ಯ ಚಿತ್ರ**

ವಿಶ್ವವಿಖ್ಯಾತ ನಾಟಕಕಾರ ಷೇಕ್ಸ್ ಪಿಯರ್ ಬಗ್ಗೆ ಆಂಗ್ಲ ಭಾಷೆಯ ಸಾಕ್ಷ್ಯಚಿತ್ರವನ್ನು ಪ್ರದರ್ಶಿಸಲಾಯಿತು.

## ೧೧-೦೮-೨೦೧೯

## ರಾಷ್ಟ್ರ ಕವಿಗಳ ಸಾಹಿತ್ಯ ಮಂಥನ-ಸರಣಿ ವಿಚಾರ ಸಂಕಿರಣ-೩

**ಸಹಯೋಗ : ಜಿ. ಎಸ್. ಎಸ್ ಟ್ರಸ್ಟ್ ಬೆಂಗಳೂರು**

**ರಾಷ್ಟ್ರಕವಿ ಜಿ. ಎಸ್. ಶಿವರುದ್ರಪ್ಪನವರ ಸಾಹಿತ್ಯ ಮಂಥನ**

ಉದ್ಘಾಟನೆ

ಪ್ರೊ. ಎಸ್. ಜಿ. ಸಿದ್ಧರಾಮಯ್ಯ, ಅಧ್ಯಕ್ಷರು, ಜಿ. ಎಸ್. ಎಸ್ ಟ್ರಸ್ಟ್



### ಗೋಷ್ಠಿ

ವಿಷಯ : ಜಿ. ಎಸ್. ಎಸ್. ಅವರ ಕಾವ್ಯ

ಪ್ರಬಂಧ ಮಂಡನೆ: ಡಾ. ಎಲ್.ಜಿ. ಮೀರಾ

ವಿಷಯ : ಜಿ. ಎಸ್. ಎಸ್ ಅವರ ವಿಮರ್ಶೆ ಮತ್ತು ಮೀಮಾಂಸೆ ಕುರಿತ ಚಿಂತನೆಗಳು

ಪ್ರಬಂಧ ಮಂಡನೆ: ಡಾ. ಎಚ್.ದಂಡಪ್ಪ,

ವಿಷಯ : ಜಿ. ಎಸ್. ಎಸ್ ಅವರ ಇತರ ಗದ್ಯ ಬರಹಗಳು

ಪ್ರಬಂಧ ಮಂಡನೆ: ಡಾ. ಬೈರಮಂಗಲ ರಾಮೇಗೌಡ

**ಸಮಾರೋಪ ಮತ್ತು ಕವಿಗೋಷ್ಠಿ**

**ಅಧ್ಯಕ್ಷತೆ: ಪ್ರೊ. ಜಿ ಎಸ್. ಸಿದ್ಧಲಿಂಗಯ್ಯ**

**ಭಾಗವಹಿಸಿದ ಕವಿಗಳು: ಎಂ, ಆರ್, ಕಮಲ, ಎಚ್. ಎಲ್ ಪುಷ್ಪ, ಲಲಿತಾ ಸಿದ್ದಬಸವಯ್ಯ, ಮಹಾಬಲಮೂರ್ತಿ ಕೊಡ್ಲೆಕೆರೆ, ಡಾ.ವಿಜಯಾ ಸುಬ್ಬರಾಜ್, ಚಿಂತಾಮಣಿ ಕೊಡ್ಲೆಕೆರೆ, ಯಲ್ಲಪ್ಪ. ಟಿ.**

## 'ಶಾಲಾ ಹಂತದಲ್ಲೇ ಕನ್ನಡಕ್ಕೆ ಕೊನೆ ಮೊಳೆ'

## ಎಸ್.ಜಿ. ಸಿದ್ಧರಾಮಯ್ಯ

'ರಾಜ್ಯದಲ್ಲಿ ಸಾವಿರಾರು ಇಂಗ್ಲಿಷ್ ಮಾಧ್ಯಮದ ಶಾಲೆ ಪ್ರಾರಂಭಿಸುವ ಮೂಲಕ ಪ್ರಾಥಮಿಕ ಶಿಕ್ಷಣ ಹಂತದಲ್ಲಿಯೇ ಕನ್ನಡದ ಅವನತಿಗೆ ಸರ್ಕಾರವು ಕೊನೆ ಮೊಳೆಹೊಡೆದಿದೆ 'ಎಂದು ಸಾಹಿತಿ ಎಸ್.ಜಿ. ಸಿದ್ಧರಾಮಯ್ಯ ಹೇಳಿದರು.

ರಾಷ್ಟ್ರಕವಿಗಳ ಸಾಹಿತ್ಯ ಮಂಥನ ಸರಣಿ ಕಾರ್ಯಕ್ರಮದಲ್ಲಿ ಮಾತನಾಡಿದ ಅವರು, 'ಶಿಕ್ಷಣ ವ್ಯವಸ್ಥೆ ಇತ್ತೀಚೆಗೆ ಉದ್ಯಮವಾಗಿದೆ.ಕನ್ನಡ



ಅಳಿಯುತ್ತಿದೆ. ಇದು ಎಲ್ಲರಿಗೂ ತಿಳಿದಿದ್ದರೂ, ಯಾರೊಬ್ಬರೂ ಧ್ವನಿ ಎತ್ತರದಿರುವುದು ವಿಪರ್ಯಾಸ' ಎಂದರು.

ಜಿ.ಎಸ್.ಎಸ್. 'ಭೇದ ಭಾವವಿಲ್ಲದ, ಎಲ್ಲರನ್ನೂ ಒಳಗೊಳ್ಳುವ ಸಂಸ್ಥೆಗಳನ್ನು ಕಟ್ಟಿ ಮುನ್ನಡೆಸುವ ದೂರದೃಷ್ಟಿ ಸಾಮರ್ಥ್ಯವನ್ನು ಹೊಂದಿದ್ದರು. ಅವರ ಕಾಲಘಟ್ಟದಲ್ಲಿ ರಾಜ್ಯದ ಎಲ್ಲ ವಿ.ವಿಗಳ ಪ್ರಸಾರಾಂಗ ವಿಭಾಗಗಳು ವಿದ್ವತ್ ಪತ್ರಿಕೆ ಸೇರಿದಂತೆ ಹಲವು ಕೃತಿ ಪ್ರಕಟಿಸುವ ಮೂಲಕ ಓದುಗರ ಸಂಖ್ಯೆ ಹೆಚ್ಚಿಸುವ, ಜ್ಞಾನವೃದ್ಧಿಸುವ ಕೆಲಸ ಮಾಡಿದವು' ಎಂದು ಸಿದ್ಧರಾಮಯ್ಯ ತಿಳಿಸಿದರು.

ಈಗ ವಿ.ವಿ.ಗಳಲ್ಲಿ ಹಳಗನ್ನಡ ಓದಲು ನಿವೃತ್ತ ಪ್ರಾಧ್ಯಾಪಕರನ್ನು ಅವಲಂಬಿಸುವ ಸ್ಥಿತಿಯಲ್ಲಿದೆ ಎಂದು ಬೇಸರಿಸಿದರು. 'ಭವಿಷ್ಯದ ಸಾಹಿತಿಗಳಿಗೆ ಜಿ.ಎಸ್. ಎಸ್. ಕೃತಿಗಳು ದಾರಿ ದೀಪದಂತಿವೆ' ಎಂದರು.

ಉದ್ಘಾಟನೆಯ ನಂತರದಲ್ಲಿ ನಡೆದ ಶಿವರುದ್ರಪ್ಪನವರ ಸಾಹಿತ್ಯ ಕುರಿತ ಗೋಷ್ಠಿಯ ಪ್ರಾರಂಭದಲ್ಲಿ ಡಾ. ಆರ್ ಲಕ್ಷ್ಮೀನಾರಾಯಣ ಅವರು ಗೋಷ್ಠಿಯ ಅಧ್ಯಕ್ಷರಾದ ವೆಂಕಟೇಶ ಮೂರ್ತಿಯವರ ಸಾಹಿತ್ಯ ಸಾಧನೆಯ ಬಗ್ಗೆ ಸಂಕ್ಷಿಪ್ತವಾಗಿ ಪರಿಚಯಿಸಿ ಕಾವ್ಯ ಎಂದರೆ ಎಚ್ಚೆಸ್ವಿ, ಎಚ್ಚೆಸ್ವಿ ಎಂದರೆ ಕಾವ್ಯ, ಎಂದು ತಿಳಿಸಿ ಅವರನ್ನೂ ಪ್ರಬಂಧ ಮಂಡನಕಾರರಾದ ಡಾ. ಎಲ್. ಜಿ. ಮೀರಾ, ಡಾ.ದಂಡಪ್ಪ ಮತ್ತು ಡಾ. ಬೈರಮಂಗಲ ರಾಮೇಗೌಡರನ್ನು ಸ್ವಾಗತಿಸಿದರು.

ಡಾ. ಎಲ್.ಜಿ. ಮೀರಾ ಅವರು **'ಜಿ.ಎಸ್.ಎಸ್. ಅವರ ಕಾವ್ಯ'** ಈ ವಿಷಯದ ಬಗ್ಗೆ ವಿದ್ವತ್ಪೂರ್ಣ ಪ್ರಬಂಧವನ್ನು ಮಂಡಿಸಿದರು.

ಜಿ. ಎಸ್. ಎಸ್. ಅವರು ಕೆ. ಎಸ್. ನ. ಅವರಂತೆಯೇ ಮುಖ್ಯವಾಗಿ ಇಹನಿಷ್ಠ ಮನೋಧರ್ಮದ ಕವಿ. ಜೀವನ ಮತ್ತು ಪ್ರಕೃತಿಯನ್ನು ಅಗಾಧವಾಗಿ ಪ್ರೀತಿಸಿದ ಕವಿ. ಅವರ ಪ್ರೀತಿಯ ಕಲ್ಪನೆ ನಿಸರ್ಗ ಪ್ರೀತಿಯಿಂದ ಹಿಡಿದು

ಸಕಲ ಸೃಷ್ಟಿಯ ಜಡಚೇತನಗಳ ವರೆಗೆ ಅದರ ವ್ಯಾಪ್ತಿ ಇದೆ ಎಂದು ಹೇಳಿದರು

ಶಿವರುದ್ರಪ್ಪನವರ ವಿಮರ್ಶೆ ಮತ್ತು ಕಾವ್ಯಮೀಮಾಂಸೆಯ ಚಿಂತನೆಗಳನ್ನು ಕುರಿತು ಡಾ. ಎಚ್. ದಂಡಪ್ಪನವರು ಮಾತನಾಡಿದರು. ಶಿವರುದ್ರಪ್ಪನವರು ಭಾರತೀಯ ಕಾವ್ಯ ಮೀಮಾಂಸಕರಾದ ಭಾಮಹ, ವಾಮನ, ಆನಂದವರ್ಧನ, ಅಭಿನವ ಗುಪ್ತ ಕುಂತಕ, ಮೊದಲಾದವರನ್ನು ಅಧ್ಯಯನ ಮಾಡಿದ್ದಷ್ಟೇ ಆಳವಾಗಿ ಪಾಶ್ಚಾತ್ಯ ವಿಮರ್ಶಕರಾದ ಟಿ. ಎಸ್. ಇಲಿಯಟ್, ಹರ್ಬರ್ಟ್, ಮರ್ರೆ ಮೊದಲಾದವರ ವಿಮರ್ಶೆಯ ತತ್ವಗಳನ್ನೂ ಅಭ್ಯಾಸ ಮಾಡಿದ್ದರು. ಇಂಗ್ಲಿಷ್ ವಿಮರ್ಶಕ ಟಿ. ಎಸ್. ಇಲಿಯಟ್ ಪರಂಪರೆಯನ್ನು ಕುರಿತಂತೆ ಬರೆದ ಪ್ರಸಿದ್ಧ ಪ್ರಬಂಧ ಓದಿದ್ದ ಅವರು ಪರಂಪರೆಯ ಹಿಡಿತ ಕವಿಗಳ ಮೇಲೆ ಎಷ್ಟು ಗಾಢವಾದದ್ದು ಎಂದು ಮನಗಂಡಿದ್ದರಿಂದ 'ಪರಂಪರೆ ಮತ್ತು ರಾಘವಾಂಕ ಪ್ರತಿಭೆಯಂಥ' ಲೇಖನ ಬರೆಯಲು ಸಾಧ್ಯವಾಯಿತು. ಒಬ್ಬ ಶಕ್ತ ಕವಿ ಮಾತ್ರ ಪರಂಪರೆಯ ಪ್ರಭಾವದಿಂದ ಬಿಡಿಸಿಕೊಳ್ಳಬಲ್ಲ ಎಂಬುದನ್ನು ಆ ಲೇಖನದಲ್ಲಿ ಹೇಳಿದ್ದಾರೆ ಎಂದರು. ಅವರ ಸಾಹಿತ್ಯ ಜನಜೀವನದ ಗತಿಬಂಬ ಎಂಬ ತತ್ವದ ಕುರಿತೂ ಹೇಳಿದರು.

ಶಿವರುದ್ರಪ್ಪನವರ ಇತರ ಗದ್ಯ ಬರಹಗಳನ್ನು ಕುರಿತು ,ಮಾತನಾಡಿದ ಬೈರಮಂಗಲ ರಾಮೇಗೌಡರು ಶಿವರುದ್ರಪ್ಪನವರ ಕಾದಂಬರಿಯನ್ನು ಹೆಸರಿಸಿದರೂ ಅವರ ಇಡೀ ಭಾಷಣ ಶಿವರುದ್ರಪ್ಪನವರ ಅಪೂರ್ಣ ಆತ್ಮಕಥೆಯಾದ 'ಚತುರಂಗ'ವನ್ನೇ ಕುರಿತದ್ದಾಗಿತ್ತು. ಅದರಲ್ಲಿ ಹುದ್ದೆಗೆ ಅರ್ಜಿ ಸಲ್ಲಿಸಿದ್ದ ಸಂದರ್ಭದಲ್ಲಿ ಅವರು ರೀಡರ್ ಆಯ್ಕೆಯಾಗದಿರುವಂತೆ ಕೆಲವರು ಹುನ್ನಾರು ನಡೆಸಿದ್ದರ ಕುರಿತು, ಆಯ್ಕೆ ಸಮಿತಿಯ ಮುಂದೆ ಹೋದಾಗ ತಜ್ಞರಾಗಿ ಬಂದಿದ್ದ ಹೆಸರಾಂತ ಪ್ರಾಧ್ಯಾಪಕರಾದ ಡಿ. ಕೆ ಭಿಮಸೇನರಾಯರು ವ್ಯಾಕರಣದ ಮೇಲೆ ಪ್ರಶ್ನೆ ಕೇಳಿದಾಗ ಅದು ತನ್ನ ಕ್ಷೇತ್ರವಲ್ಲವೆಂದು ಉತ್ತರಿಸಿದ್ದು. ನಂತರ ಮಾಳವಾಡರು ಷಡಕ್ಷರಿಯ ರಾಜಶೇಖರ ವಿಳಾಸದ ಪದ್ಯವೊಂದರ ಅರ್ಥ ತಿಳಿಸಲು ಕೇಳಿದಾಗ ಸಿದ್ಧತೆಯಿಲ್ಲದೆ ಯಾವುದೇ ಪದ್ಯದ ಅರ್ಥ ಹೇಳಲಾಗುವುದಿಲ್ಲ; ಅಲ್ಲದೆ 'ದೇರೀಸ್ ನೋ ಲೈಟ್ ಇನ್ ಇಟ್ ಟು ಎನ್‌ಲೈಟೈನ್' ಎಂದು ದಿಟ್ಟವಾಗಿ ಉತ್ತರಿಸಿದ ಅವರ ಸ್ವತಂತ್ರ ಮತ್ತು ಆತ್ಮ ಪ್ರತ್ಯಯವನ್ನು ಶ್ಲಾಘಿಸಿದರು.

ಅಧ್ಯಕ್ಷತೆ ವಹಿಸಿದ್ದ ಡಾ.ಎಚ್ಚೆಸ್. ವೆಂಕಟೇಶಮೂರ್ತಿಯವರು ಶಿವರುದ್ರಪ್ಪನವರ ಶಿಷ್ಯ ವಾತ್ಸಲ್ಯದ ಬಗ್ಗೆ ಹೇಳುತ್ತ ಅದಕ್ಕೆ ನಿಜವಾದ ಪ್ರೇರಕ ಶಕ್ತಿ ಶಿಷ್ಯರಲ್ಲಿ ಜಾತಿಬೇದ ಎಣಿಸದ ಅವರ ಪ್ರೀತಿಯ ಗುರುಗಳಾಗಿದ್ದ ತ.ಸು.ಶಾಮರಾಯರು. ಅವರಿಂದಲೇ ಅವರು ಅದನ್ನು ರೂಢಿಸಿಕೊಂಡು ಜಾತಿಭೇದ ಎಣಿಸದೆ ಶಿಷ್ಯರನ್ನು ಪ್ರೋತ್ಸಾಹಿಸುತ್ತಿದ್ದ ಸಂಗತಿ ಹಾಗೂ ಅವರ ವ್ಯಕ್ತಿತ್ವದ ಮೇಲೆ ಅತ್ಯಂತ ಆಳವಾದ ಪ್ರಭಾವ ಬೀರಿದವರು ತೀನಂಶ್ರೀ, ಎಂದು ಹೇಳಿ ಅವರ ನಿಲುವು, ಅವರ ರೀತಿ,ಅವರು ಪಾಠ ಮಾಡುವ ಭಂಗಿ ಎಲ್ಲದರ ಮೇಲೂ ತೀನಂಶ್ರೀಯವರ ಪ್ರಭಾವವಿದ್ದುದನ್ನು ತಿಳಿಸಿದರು. 'ಕಾವ್ಯಾರ್ಥ ಚಿಂತನ' ಕೃತಿಗೆ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಬಂದಿದ್ದಕ್ಕೆ ಅದರಲ್ಲೂ ಅಡಿಗರು ಅದರ ಚಿಂತನೆಯ ಗಾಢತೆಯನ್ನು ಕುರಿತು ಮೆಚ್ಚಿಗೆಯ ಮಾತುಗಳನ್ನು ಹೇಳಿದ್ದಕ್ಕೆ ಜಿ. ಎಸ್. ಎಸ್ ತುಂಬ ಸಂತಸಪಟ್ಟಿದ್ದ ಸಂಗತಿಯನ್ನು ಹಂಚಿಕೊಂಡರು.

ಶ್ರೀ ರವೀಂದ್ರನಾಥ್ ಅವರ ವಂದನಾರ್ಪಣೆಯೊಂದಿಗೆ ಗೋಷ್ಠಿ ಮುಕ್ತಾಯವಾಯಿತು.

ಮಧ್ಯಾಹ್ನ ಹಿರಿಯ ಕವಿ, ಸಾಹಿತಿ, ಪ್ರೊ.ಜಿ ಎಸ್. ಸಿದ್ಧಲಿಂಗಯ್ಯನವರ ಅಧ್ಯಕ್ಷತೆಯಲ್ಲಿ ಸಮಾರೋಪ ಸಮಾರಂಭ ಮತ್ತು ಕವಿಗೋಷ್ಠಿ ನಡೆಯಿತು. ಪ್ರಾರಂಭದಲ್ಲಿ ಪ್ರತಿಷ್ಠಾನದ ಅಧ್ಯಕ್ಷರು ಅಧ್ಯಕ್ಷತೆ ವಹಿಸಿದ್ದ ಸಿದ್ಧಲಿಂಗಯ್ಯನವರನ್ನು ಸಂಕ್ಷಿಪ್ತವಾಗಿ ಪರಿಚಯಿಸಿ ಎಲ್ಲರನ್ನೂ ಸ್ವಾಗತಿಸಿದರು. ಸಮಾರೋಪ ಭಾಷಣಮಾಡಿದ ಸಿದ್ಧಲಿಂಗಯ್ಯನವರು ತಮ್ಮ ಮತ್ತು ಶಿವರುದ್ರಪ್ಪನವರ ನಡುವೆ ಇದ್ದ ಸ್ನೇಹದ ಬಗ್ಗೆ ತಿಳಿಸಿದರು. ಅಲ್ಲದೆ ಅವರ 'ಜಡೆ' ಕವನ ಕುರಿತು ಅದೊಂದು ತುಂಬ ಒಳ್ಳೆಯ ಕವನ ಎಂದು ತಾವು ಮೆಚ್ಚುಗೆ ಸೂಚಿಸಿದರೂ ಅವರಿಗೆ ನಂಬಿಕೆ ಬರದೆ ಪು. ತಿ. ನ. ಕೂಡ ಮೆಚ್ಚಿದಾಗ ಅವರಿಗೆ ವಿಶ್ವಾಸ ಬಂದ ಬಗ್ಗೆ ತಿಳಿಸಿದರು. ಅವರ 'ಹಣತೆ ಹಚ್ಚುತ್ತೇನೆ ನಾನು' ಕವನ ಕೂಡ ಪ್ರಸ್ತಾಪಿಸಿದರು. ಸುಮಾರು ೨೦ ವರ್ಷ ಕನ್ನಡ ಅಧ್ಯಯನ ಕೇಂದ್ರ ಕಟ್ಟಿ ಬೆಳೆಸಿದ ಬಗ್ಗೆ, ಅಲ್ಲಿ ಅವರು ನಡೆಸುತ್ತಿದ್ದ ವಿಚಾರ ಸಂಕಿರಣಗಳ ಬಗ್ಗೆ ತಿಳಿಸಿ ಅವರ ಕನ್ನಡ ಕೈಂಕರ್ಯವನ್ನು ಶ್ಲಾಘಿಸಿದರು. ನಂತರ ನಡೆದ ಕವಿಗೋಷ್ಠಿಯಲ್ಲಿ ಶ್ರೀ ಚಿಂತಾಮಣಿ ಕೊಡ್ಲೆಕೆರೆ, ಎಚ್. ಎಲ್. ಪುಷ್ಪ, ಎಂ.ಆರ್ ಕಮಲ, ಲಲಿತಾ ಸಿದ್ಧಬಸವಯ್ಯ, ಯಲ್ಲಪ್ಪ, ವಿಜಯ ಸುಬ್ಬರಾಜ್ ಮತ್ತು ಆರ್.ಲಕ್ಷ್ಮೀನಾರಾಯಣ ಅವರುಗಳು ತಮ್ಮ ಕವನಗಳನ್ನು ವಾಚಿಸಿದರು. ಕೊನೆಯಲ್ಲಿ ಸಿದ್ಧಲಿಂಗಯ್ಯನವರು ಕೂಡ ಒಂದು ಕವನ ವಾಚಿಸಿದರು.ಕವಿಗೋಷ್ಠಿ ಅತ್ಯಂತ ಚೇತೋಹಾರಿಯಾಗಿತ್ತು.

ಕೋಶಾಧ್ಯಕ್ಷರಾದ ಡಾ.ಅನಿಲ್ ಕುಮಾರ್ ಅವರ ವಂದನಾರ್ಪಣೆಯೊಂದಿಗೆ ಕಾರ್ಯಕ್ರಮ ಮುಕ್ತಾಯವಾಯಿತು.

**೨೯-೦೭-೨೦೧೯**

## ನುಡಿಯಾರಾಧಕರ ಸ್ಮರಣೆ ಕಾರ್ಯಕ್ರಮ – ೨

ನುಡಿಯಾರಾಧಕರ ಸ್ಮರಣೆ ಕಾರ್ಯಕ್ರಮ ಬಹಳ ಯಶಸ್ವಿಯಾಗಿ ನಡೆಯಿತು. ಹಿರಿಯ ಸಾಹಿತಿಗಳನ್ನು ಸ್ಮರಣೆಸಿಕೊಳ್ಳುವ ಈ ಸರಣಿ ಕಾರ್ಯಕ್ರಮದಲ್ಲಿ ಹಿರಿಯ ಸಾಹಿತಿಗಳ ಬದುಕು ಬರಹಗಳ ಬಗ್ಗೆ ಈ ಕೆಳಕಂಡ ಸಾಹಿತ್ಯಾಭಿಮಾನಿಗಳು ತಮ್ಮ ವಿಚಾರಗಳನ್ನು ಮಂಡಿಸಿದರು.

೧. ಶ್ರೀ ಎ.ಎನ್. ಮೂರ್ತಿರಾವ್ – ಶ್ರೀಮತಿ ಸಂಧ್ಯಾ ವಿ.
೨. ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರ್ – ಶ್ರೀ ಮುಂ.ಅ. ವೆಂಕಟೇಶ್
೩. ಶ್ರೀ ತ.ಸು. ಶಾಮರಾಯರು – ಶ್ರೀ ಮಹಾಬಲ
೪. ಶ್ರೀಮತಿ ಜಯದೇವಿ ಲಿಗಾಡೆ – ಡಾ. ನಳಿನಿ ವೆಂಕಟೇಶ್
೫. ಶ್ರೀ ಸಿದ್ಧಯ್ಯ ಪುರಾಣಿಕ – ಡಾ. ವಾದಿರಾಜ್ ಆರ್.
೬. ಶ್ರೀ ನಿರಂಜನ – ಶ್ರೀ ಪ್ರಕಾಶ್
೭. ಶ್ರೀ ಫ.ಗು. ಹಳಕಟ್ಟಿ – ಶ್ರೀ ಬಿ.ಎಸ್. ಗುರುಪ್ರಸಾದ್
೮. ಶ್ರೀ ಎ.ಎನ್. ಮೂರ್ತಿರಾವ್ – ಡಾ. ರಮಾನಂದ
೯. ಶ್ರೀ ಬಿ. ವೆಂಕಟಾಚಾರ್ಯ –ಡಾ. ವಿಜಯಾಸುಬ್ಬರಾಜ್




೧೦. ಎಲ್ಲರ ಬಗ್ಗೆ ಸಂಕ್ಷಿಪ್ತ ಪರಿಚರ – ಶ್ರೀ ಬುಕ್ಕಾಂಬುಧಿ ಸತ್ಯನಾರಾಯಣ

ವೃತ್ತ ಪತ್ರಿಕೆಗಳಲ್ಲಿ ಪ್ರಕಟವಾಗುವ ಸಾಹಿತಿಗಳ ವಿವರಗಳನ್ನು ಅಪಾರ ಸಂಖ್ಯೆಯಲ್ಲಿ ಸಂಗ್ರಹಿಸಿರುವ ಶ್ರೀ ಮುಂ.ಅ.ವೆಂಕಟೇಶ್ ಅವರು ಅಂದಿನ ದಿನದಂದು ಸ್ಮರಿಸಿಕೊಂಡ ಎಲ್ಲಾ ಹಿರಿಯ ಸಾಹಿತಿಗಳ ವಿವರಗಳನ್ನು ಪ್ರದರ್ಶಿಸಿದ್ದರು.

**೧೯-೦೮-೨೦೧೯**

## ನುಡಿಯಾರಾಧಕರ ಸ್ಮರಣೆ ಕಾರ್ಯಕ್ರಮ – ೩

ನುಡಿಯಾರಾಧಕರ ಸ್ಮರಣೆ ಕಾರ್ಯಕ್ರಮ ಬಹಳ ಯಶಸ್ವಿಯಾಗಿ ನಡೆಯಿತು. ಹಿರಿಯ ಸಾಹಿತಿಗಳನ್ನು ಸ್ಮರಣೆಸಿಕೊಳ್ಳುವ ಈ ಸರಣಿ ಕಾರ್ಯಕ್ರಮದಲ್ಲಿ ಹಿರಿಯ ಸಾಹಿತಿಗಳ ಬದುಕು ಬರಹಗಳ ಬಗ್ಗೆ ಈ ಕೆಳಕಂಡ ಸಾಹಿತ್ಯಾಭಿಮಾನಿಗಳು ತಮ್ಮ ವಿಚಾರಗಳನ್ನು ಮಂಡಿಸಿದರು

೧. ದೇ. ಜವರೇಗೌಡ – ಶ್ರೀ ಮುಂ.ಅ. ವೆಂಕಟೇಶ್



೨. ಆಲೂರ ವೆಂಕಟರಾಯರು – ಡಾ. ರಮಾನಂದ
೩. ರಂ ಶ್ರೀ ಮುಗಳಿ – ಡಾ. ವಾದಿರಾಜ್ ಆರ್.
೪. ಬಿ.ಎಲ್.ರೈಸ್ – ಶ್ರೀ ಬಿ.ಎಸ್. ಗುರುಪ್ರಸಾದ್
೫. ನಿರುಪಮಾ – ಶ್ರೀ ಬುಕ್ಕಾಂಬುಧಿ ಸತ್ಯನಾರಾಯಣ
೬. ತ್ರಿವೇಣಿ – ಶ್ರೀಮತಿ ಭಾರತಿ
೭. ಟಿ ಪಿ ಕೈಲಾಸಂ, ಶಾಂತಿನಾಥ ದೇಸಾಯಿಮ, ಜಿ.ಬಿ. ಜೋಶಿ, ಮಧುರ ಚೆನ್ನ – ಡಾ. ಆರ್. ಲಕ್ಷ್ಮಿನಾರಾಯಣ

ವೃತ್ತ ಪತ್ರಿಕೆಗಳಲ್ಲಿ ಪ್ರಕಟವಾಗುವ ಸಾಹಿತಿಗಳ ವಿವರಗಳನ್ನು ಅಪಾರ ಸಂಖ್ಯೆಯಲ್ಲಿ ಸಂಗ್ರಹಿಸಿರುವ ಶ್ರೀ ಮುಂ.ಅ.ವೆಂಕಟೇಶ್ ಅವರು ಅಂದಿನ ದಿನದಂದು ಸ್ಮರಿಸಿಕೊಂಡ ಎಲ್ಲಾ ಹಿರಿಯ ಸಾಹಿತಿಗಳ ವಿವರಗಳನ್ನು ಪ್ರದರ್ಶಿಸಿದ್ದರು.

**೨೪–೭–೨೦೧೯**

## ಸಾಹಿತ್ಯ ಸಂಚಲನ

### ಬಿ.ಎಂ.ಶ್ರೀ ಪ್ರತಿಷ್ಠಾನದ ಸಹಯೋಗದಲ್ಲಿ ಕರ್ನಾಟಕ ಲೇಖಕಿಯರ ಸಂಘದ ಕಾರ್ಯಕ್ರಮ

ಉಪನ್ಯಾಸ ಮತ್ತು 'ಸ್ನೇಹಗುಚ್ಛ' ಕೃತಿ ಬಿಡುಗಡೆ

**ಉಪನ್ಯಾಸಕರು : ಶ್ರೀ ಕೃಷ್ಣ ಸುಬ್ಬರಾವ್**

**ವಿಷಯ: ಮಹಿಳೆ ಮತ್ತು ಹಾಸ್ಯ ಸಾಹಿತ್ಯ**

ಸಾಹಿತ್ಯ ವಲಯದಲ್ಲಿ ಹಾಸ್ಯ ಸಾಹಿತ್ಯವನ್ನು ಪ್ರತ್ಯೇಕವಾಗಿ ಗುರುತಿಸಬಹುದು. ಹಾಸ್ಯ ಲೇಪನವಿದ್ದ ಸಾಹಿತ್ಯ ಉತ್ತಮ ಸಾಹಿತ್ಯವೆನಿಸಿ ಕೊಳ್ಳುತ್ತದೆ. ಸಾಹಿತ್ಯದಲ್ಲಿ ಶೈಲಿ ಮತ್ತು ಏನು ಬರೆಯುತ್ತೇವೆ ಎನ್ನುವುದು ಮುಖ್ಯವಾಗುತ್ತದೆ. ಸಾಹಿತಿ ಪೂರ್ಣಚಂದ್ರ ತೇಜಸ್ವಿಯವರ ಅಭಿಪ್ರಾಯದಂತೆ 'ಒಳ್ಳೆಯ ಗ್ರಹಿಕೆಯಿಂದ ಉತ್ತಮ ಸಾಹಿತ್ಯ ಹೊರಹೊಮ್ಮಲು ಸಾಧ್ಯ.' ಹೀಗೆ ಹೇಳಿದ್ದು ಖ್ಯಾತ ಹಾಸ್ಯ ಸಾಹಿತಿ ಶ್ರೀ.ಕೃಷ್ಣ ಸುಬ್ಬರಾವ್‌ರವರು. ಕರ್ನಾಟಕ ಲೇಖಕಿಯರ ಸಂಘ ಮತ್ತು ಬಿಎಂಶ್ರೀ ಪ್ರತಿಷ್ಠಾನದ ಸಹಯೋಗದಲ್ಲಿ, ನಡೆಸಿಕೊಂಡು ಬರುತ್ತಿರುವ ಸಾಹಿತ್ಯ ಸಂಚಲನ ಸರಣಿಯ ಹದಿಮೂರನೆಯ ಕಾರ್ಯಕ್ರಮದಲ್ಲಿ 'ಮಹಿಳೆ ಮತ್ತು ಹಾಸ್ಯ ಸಾಹಿತ್ಯ' ಎನ್ನುವ ವಿಷಯ ಕುರಿತು ಉಪನ್ಯಾಸ ನೀಡಿದ ಅವರು ಹಾಸ್ಯ ಸಾಹಿತ್ಯ ಸೃಷ್ಟಿ ಮಾಡಲು, ಶೈಲಿ ಕಂಡುಕೊಳ್ಳಲು ನಾವು ಬಹುಕೃತರಾಗಿರಬೇಕು. ಖ್ಯಾತ ಲೇಖಕರ ಪುಸ್ತಕಗಳನ್ನು ಓದಬೇಕು ಎಂದರು. ಉದಯೋನ್ಮುಖರು ಮನೆಯ ಪರಿಸರವನ್ನು ವಸ್ತುವಾಗಿ ಬಳಸುತ್ತಾರೆ. ವೃತ್ತಿನಿರತರು ವೃತ್ತಿಯ ಬಗ್ಗೆ ಬರೆದರೆ ಸಂಪದ್ಭರಿತವಾದ ಸಾಹಿತ್ಯ ಉದ್ಭವವಾಗುತ್ತದೆ ಎಂದು ಚುರುಕಾದ, ಸಾರವತ್ತಾದ ಮಾತುಗಳನ್ನಾಡಿದರು.




ಸಾಹಿತ್ಯ ಸಂಚಲನ ಸರಣಿ ಕಾರ್ಯಕ್ರಮ ಎರಡನೆಯ ವರ್ಷಕ್ಕೆ ಕಾಲಿಟ್ಟ ಸಂತಸದ ಸಂದರ್ಭದಲ್ಲಿ 'ಸ್ನೇಹಗುಚ್ಛ' ಹಾಸ್ಯ ಸಂಕಲನ ಕೃತಿಯ ಬಿಡುಗಡೆಯ ಕಾರ್ಯಕ್ರಮವನ್ನೂ ಏರ್ಪಡಿಸಲಾಗಿತ್ತು. ಈ ಕೃತಿಯ ಬರಹಗಾರ್ತಿಯರು ಹಾಸ್ಯ ಲೇಖಕಿಯರಾದ – ಭುವನೇಶ್ವರಿ ಹೆಗಡೆ, ಕುಮುದಾ ಪುರುಷೋತ್ತಮ್, ವಾಣೀ ಸುರೇಶ್, ಡಾ.ಸಹನಾ ಪ್ರಸಾದ್, ಗಾಯತ್ರಿ ಮೂರ್ತಿ, ಡಾ.ಶ್ಯಾಮಲಾ ರವಿಶಂಕರ್ ಮತ್ತು ಜಿ.ವಿ. ನಿರ್ಮಲ. ಮೂವತ್ತೈದು ಹಾಸ್ಯಲೇಖನಗಳನ್ನೊಳಗೊಂಡಿರುವ ಈ ಸಂಕಲನದ ಎಲ್ಲ ಬರಹಗಾರ್ತಿಯರೂ 'ಅಪರಂಜಿ' ಪತ್ರಿಕೆಯ ಬರಹಗಾರ್ತಿಯರೇ. ಕೃತಿ ಬಿಡುಗಡೆ ಮಾಡಿದವರು ಸಹ 'ಅಪರಂಜಿ' ಪತ್ರಿಕೆಯ ಸಂಪಾದಕರಾಗಿರುವ ಶ್ರೀ. ಎಂ.ಶಿವಕುಮಾರ್‌ರವರು.ಅವರು 'ಈ ಏಳು ಜನ ಲೇಖಕಿಯರು ನಮ್ಮ 'ಅಪರಂಜಿ'ಯ ಸಪ್ತ ಸ್ವರಗಳಂತೆ ಒಟ್ಟುಗೂಡಿದ್ದಾರೆ' ಎಂದು ಮೆಚ್ಚುಗೆ ವ್ಯಕ್ತ ಪಡಿಸಿದರು.

ಅಂದು ಬಿಡುಗಡೆಯಾದ 'ಸ್ನೇಹಗುಚ್ಛ' ಕೃತಿಯ ಪರಿಚಯವನ್ನು ಮಾಡಿದ ಕೃಷ್ಣ ಸುಬ್ಬರಾವ್‌ರವರು ಹಾಸ್ಯ ಸಾಹಿತ್ಯವನ್ನು ಇತರ ಸಾಹಿತ್ಯ ಪ್ರಕಾರದಿಂದ ಬೇರ್ಪಡಿಸಬಾರದೆಂಬುದು ಪ್ರಸಿದ್ಧ ಪತ್ರಕರ್ತ ಮತ್ತು ಹಾಸ್ಯ ಸಾಹಿತಿ ದಿವಂಗತ ವೈಎನ್‌ಕೆರವರ ನಿಲುವಾಗಿತ್ತು. ಹಾಸ್ಯದಲ್ಲಿ ಭಾಷೆ ಮುಖ್ಯವಲ್ಲ. ಅದು ನಮ್ಮ ಅನುಭವವಾಗಿರಬಹುದು ಅಥವಾ ಇತರರಿಂದ ತಿಳಿದ ವಿಷಯವಾಗಿರಬಹುದು. ಕಾಲಕ್ಕೆ ತಕ್ಕಂತೆ 'ಅಪ್‌ಡೇಟ್' ಆಗುವುದು ಬಹಳ ಮುಖ್ಯ. ಹಿಂದೆ ಟಿ.ಸುನಂದಮ್ಮನವರೊಬ್ಬರೇ ಹಾಸ್ಯ ಸಾಹಿತಿ ಎನಿಸಿಕೊಂಡಿದ್ದರು. ಈಗ ಭುವನೇಶ್ವರಿ ಹೆಗಡೆಯವರು ಅವರ ಜಾಗವನ್ನು ತುಂಬಿದ್ದಾರೆ. ಪಾ.ವೆಂ ಆಚಾರ್ಯರೇ ಅವರ ಲೇಖನಗಳನ್ನು ಕಂಡು 'ಆಡಂಬರವಿಲ್ಲದ, ಬೂಟಾಟಿಕೆಯಿಲ್ಲದ, ವಿದ್ವತ್ ಪ್ರದರ್ಶನವಿಲ್ಲದ, ಸೃಜನಶೀಲ ಬರವಣಿಗೆ' ಎಂದು ಹಾಡಿ ಹೊಗಳಿದ್ದಾರೆ. ಈಗ 'ಹಾಸ್ಯ ಲೇಖಕಿಯರ ಸಂಘ' ಎಂದು ಸಂಘ ಕಟ್ಟಿಕೊಳ್ಳುವಷ್ಟು ಲೇಖಕಿಯರ ಸಂಖ್ಯೆ ಬೆಳೆಯುತ್ತಿದೆ. ಹಾಸ್ಯ ಸಾಹಿತ್ಯಕ್ಕೆ ನುಗ್ಗೇಹಳ್ಳಿ ಪಂಕಜರವರ ಕೊಡುಗೆಯೂ ಅಪಾರ ಎಂದರು.

'ಸ್ನೇಹಗುಚ್ಛ' ಕೃತಿ ಪರಿಚಯ ಮಾಡುತ್ತಾ, ವಾಣೀ ಸುರೇಶ್‌ರವರ 'ನೀ ನಾತದೊಳಗೋ, ನಿನ್ನೊಳು ನಾತವೋ', ಸಹನಾ ಪ್ರಸಾದ್‌ರವರ 'ದೇವರಿಗೂ ಇಷ್ಟೊಂದು ಪ್ರಾಬ್ಲಮ್‌ಗಳು', ಗಾಯತ್ರಿ ಮೂರ್ತಿಯವರ 'ಗಂಡ ಹೆಂಡ್ತಿ ಜಗಳ', ಡಾ.ಶ್ಯಾಮಲ ರವಿಶಂಕರ್‌ರವರ 'ರೀಸೈಕಲ್ ಗಣೇಶ', ಭುವನೇಶ್ವರಿ ಹೆಗಡೆಯವರ 'ಏಕಾಕ್ಷರೀ ಮಂತ್ರ', ಕುಮುದಾ ಪುರುಷೋತ್ತಮ್‌ರವರ 'ಲಂಚೋಪಖ್ಯಾನ', 'ವಾಚಕರವಾಣಿ', ಜಿ.ವಿ.ನಿರ್ಮಲರವರ 'ಒನಕೆಯ ಭಾಗ್ಯ' –ಹೀಗೆ ಲೇಖಕಿಯರ ಒಂದೊಂದು ಬರಹಗಳನ್ನು ಮೆಚ್ಚುತ್ತಾ, ಸಭಿಕರಲ್ಲಿ ಬರಹಗಳನ್ನು ಆದಷ್ಟು ಬೇಗ ಓದಬೇಕೆನ್ನುವ ಕುತೂಹಲವನ್ನು ಮೂಡಿಸಿದರು. ಮಧ್ಯ,ಮಧ್ಯದಲ್ಲಿ ನಾ.ಕಸ್ತೂರಿ, ರಾಶಿ, ತ್ರಿವೇಣಿ. ಅನುಪಮಾ ನಿರಂಜನ, ಎಚ್. ನರಸಿಂಹಯ್ಯ ಮುಂತಾದವರು ರಚಿಸಿದ ಹಾಸ್ಯ ಪ್ರಸಂಗಗಳನ್ನು ಸಾಂದರ್ಭಿಕವಾಗಿ ಹೇಳುತ್ತಾ ಸಭಿಕರನ್ನು ನಗೆಗಡಲಿನಲ್ಲಿ ತೇಲಿಸಿದರು. ಸಭೆಗಳಲ್ಲಿ ಹೂಗುಚ್ಛವನ್ನು ನೀಡುವ ಬದಲು ಸ್ನೇಹಗುಚ್ಛವನ್ನು ಕೊಡಿ ಎಂದು ಸಲಹೆ ನೀಡಿದರು.

ಬಿಎಂಶ್ರೀ ಪ್ರತಿಷ್ಠಾನದ ಅಧ್ಯಕ್ಷರಾದ ಡಾ. ಆರ್.ಲಕ್ಷ್ಮೀನಾರಾಯಣ್‌ರವರು 'ಸ್ನೇಹಗುಚ್ಛ' ಕೃತಿಯನ್ನು ರಚಿಸಿದವರು ವಿವಿಧ ವೃತ್ತಿಯ ಅನುಭವ ಉಳ್ಳವರಾದ್ದರಿಂದ, ಅವರ ವ್ಯಕ್ತಿ ಚಿತ್ರಣ ಅವರ ಬರಹಗಳಲ್ಲಿ ವ್ಯಕ್ತವಾಗಿದೆ. ಇವರು ಪುರುಷರ ಸಾಹಿತ್ಯವನ್ನು ಮೀರಿಸುವಂತಹ ಸಾಹಿತ್ಯವನ್ನು ಸೃಷ್ಟಿ ಮಾಡಿದ್ದಾರೆ. ಭಾಷೆಯ ಅಭಿವೃದ್ಧಿಯ ಮುನ್ಸೂಚನೆಯನ್ನೂ ಕಾಣಬಹುದು ಎಂದರು.

ಪ್ರಕಾಶನದ ಜವಾಬ್ದಾರಿ ವಹಿಸಿ, ಬೆನ್ನುಡಿಯನ್ನು ಬರೆದಿರುವ ಶ್ರೀ. ಎನ್.ರಾಮನಾಥ್‌ರವರು ಶ್ಲೇಷೆಯಿಂದ ಹಾಸ್ಯ ಉತ್ಪತ್ತಿಯಾಗುತ್ತದೆ ಎಂದು ವಿವರಿಸಿದರು. ಸಭೆಯ ಅಧ್ಯಕ್ಷತೆ ವಹಿಸಿದ್ದ ವನಮಾಲಾ ಸಂಪನ್ನಕುಮಾರವರು ಉತ್ತಮ ಪ್ರತಿಭೆಗಳು ಸಂಘದ ಒಡಲಲ್ಲಿರುವುದು ಸಂತಸದ ವಿಷಯವೆಂದು, ಎಲ್ಲಾ ಲೇಖಕಿಯರ ಬಗ್ಗೆ ಮೆಚ್ಚುಗೆ ವ್ಯಕ್ತ ಪಡಿಸಿದರು.

ಕಾರ್ಯಕ್ರಮದ ನಿರೂಪಣೆಯ ಕಾರ್ಯವನ್ನು ಸಂಘದ ಸದಸ್ಯೆ ಸವಿತಾ ನಾಗೇಶ್ ಅಚ್ಚುಕಟ್ಟಾಗಿ ನಿರ್ವಹಿಸಿದರು. ಭಾಗ್ಯಲಕ್ಷ್ಮಿಯವರ ಪ್ರಾರ್ಥನೆಯೊಂದಿಗೆ ಪ್ರಾರಂಭವಾದ ಕಾರ್ಯಕ್ರಮದಲ್ಲಿ ಸಹಕಾರ್ಯದರ್ಶಿ ಜಿ.ವಿ.ನಿರ್ಮಲ ಸಭೆಗೆ ಸ್ವಾಗತ ಕೋರಿ, ಮುಖ್ಯ ಅತಿಥಿಗಳನ್ನು ಪರಿಚಯಿಸಿದರು. ಉಪಾಧ್ಯಕ್ಷೆ ಡಾ.ಜ್ಯೋತಿ ಶಶಿಕುಮಾರ್‌ರವರು ಆಗಮಿಸಿದ್ದ ವೇದಿಕೆಯ ಗಣ್ಯರಿಗೂ, ಸಭಿಕರಿಗೂ, ಹಾಸ್ಯ ಬರಹಗಾರ್ತಿಯರಿಗೂ ವಂದನೆ ಸಲ್ಲಿಸಿದರು.

### ಕಿರುಪರಿಚಯ

### ಶ್ರೀ ಕೆ. ವಿಶ್ವನಾಥ

ಹವ್ಯಾಸ

ಅಂಚೆಚೀಟಿ, ನಾಣ್ಯಗಳನ್ನು ಮತ್ತು ನೋಟುಗಳನ್ನು ವಿಷಯಾವಾರು ವಿಂಗಡಿಸಿ ಸಂಗ್ರಹಿಸಿರುತ್ತಾರೆ. ಅನೇಕ ಶಾಲಾ, ಕಾಲೇಜುಗಳಲ್ಲಿ ಪ್ರದರ್ಶನ ನೀಡಿರುತ್ತಾರೆ. ಅವರ ಸಂಗ್ರಹದಲ್ಲಿ ೧೨೫೦ಕ್ಕೂ ಮೀರಿದ ಸಾಧಕರ ಹಸ್ತಾಕ್ಷರಗಳಿವೆ. ೮೫ಕ್ಕೂ ಮೀರಿದ ವಿಷಯಗಳಲ್ಲಿ ನಾಣ್ಯ ಮತ್ತು ದೋಣಿಗಳ ಅಂಚೆಚೀಟಿಗಳು. ಕ್ರೀಡೆಗಳ ಅಂಚೆಚೀಟಿಗಳು. ಎಲಿಜಬೆತ್, ಡಯಾನ, ವಿನ್‌ಸ್ಟನ್ ಚರ್ಚಿಲ್, ಮದರ್ ಥೆರೇಸ ಮುಂತಾದವರ ಅಂಚೆಚೀಟಿಗಳು, ಚಿಕ್ಕದೇವರಾಜರ ಕಾಲದ ನಾಣ್ಯಗಳು, ಬ್ರಿಟಿಷರ ಕಾಲದ ನಾಣ್ಯಗಳು. ಗಣರಾಜ್ಯ ಭಾರತದ ನಾಣ್ಯಗಳು ಪಕ್ಷಿ ಮತ್ತು ಪ್ರಾಣಿಗಳಿರುವ ನಾಣ್ಯಗಳು ರಂಧ್ರಗಳಿರುವ ನಾಣ್ಯಗಳು ಇತ್ಯಾದಿ. ಸಂಗ್ರಹಕಾರರ ಅಪಾರ ಶ್ರಮ, ಶ್ರದ್ಧೆ ಮತ್ತು ತಾಳ್ಮೆಗಳಿಗೆ ಇವು ಸಾಕ್ಷಿಯಾಗಿವೆ. ಜಗತ್ತಿನ ಇತಿಹಾಸ, ಪ್ರಮುಖ ವ್ಯಕ್ತಿಗಳು, ಘಟನೆಗಳನ್ನು ಸಂಕ್ಷೇಪದಲ್ಲಿ ಹಿಡಿದಿಡುವ ಮಹಾಪ್ರಯತ್ನ ಇದು. ಹವ್ಯಾಸದ ಉದ್ದೇಶ.

ಈ ರೀತಿಯ ಪ್ರದರ್ಶನದಿಂದ ವಿದ್ಯಾರ್ಥಿಗಳು ಸ್ಫೂರ್ತಿಗೊಂಡು, ಯಾವುದಾದರೂ ಕ್ರಿಯಾತ್ಮಕವಾದ ಹವ್ಯಾಸದಲ್ಲಿ ತೊಡಗಲು ಉತ್ತೇಜಿಸುವುದೇ ಆಗಿದೆ.

### ೧೭-೭-೨೦೧೯

### ದತ್ತಿ ಕಾರ್ಯಕ್ರಮ

**ಶ್ರೀ ಬಿ.ಎಸ್. ಸಣ್ಣಯ್ಯ, ಡಾ. ಎಂ.ಎಲ್. ಲಲಿತಮ್ಮ, ರಾಸ ಸಾಹಿತ್ಯ, ಡಿ.ಲಿಂಗಯ್ಯ, ಟಿ.ಎಸ್. ವೆಂಕಣ್ಣಯ್ಯ, ತೀ.ನಂ.ಶ್ರೀ, ಶಾರದಹನುಮಯ್ಯ ಇವರುಗಳ ದತ್ತಿ**




ಪ್ರಾಚೀನ ಭಾರತದ ನಾಣ್ಯಗಳ ಪ್ರದರ್ಶನ ಮತ್ತು ಕನ್ನಡ ಸಾಹಿತಿಗಳ ಹಸ್ತಾಕ್ಷರಗಳ ಪ್ರದರ್ಶನ

ದಿನಾಂಕ: ೧೭-೭- ೨೦೧೯ರಂದು ಈ ಪ್ರದರ್ಶನವನ್ನು ಬಿ.ಎಂ.ಶ್ರೀ ಪ್ರತಿಷ್ಠಾನದಲ್ಲಿ ಏರ್ಪಡಿಸಲಾಗಿತ್ತು.ಈ ಪ್ರದರ್ಶನವನ್ನು ಡಾ.ಆರ್.ಲಕ್ಷ್ಮೀ ನಾರಾಯಣ ಅವರು ಉದ್ಘಾಟಿಸಿದರು. ಭಾರತದ ನಾಣ್ಯಗಳು, ರಿಪಬ್ಲಿಕ್ (ಗಣರಾಜ್ಯ) ಭಾರತದ ನಾಣ್ಯಗಳು, ಕಾಂಗೋ ದೇಶದ ಪೇಂಟಿಂಗ್ ಅದ ಬೆಳ್ಳಿ ನಾಣ್ಯಗಳು, ಫ್ಯಾನ್ಸಿ ಸಂಖ್ಯೆಗಳುಳ್ಳ ನೋಟುಗಳು, ಕನ್ನಡದ ಜ್ಞಾನಪೀಠ ಪ್ರಶಸ್ತಿ ಪಡೆದವರ ಮತ್ತು ಬೇರೆ ಸಾಹಿತಿಗಳ ಹಸ್ತಾಕ್ಷರಗಳು, ಭಾರತದ ಪಕ್ಷಿಗಳ ಅಂಚೆಚೀಟಿಗಳು,ಭಾರತದ ಪುಷ್ಪಗಳ ಅಂಚೆಚೀಟಿಗಳು, 'ನಮ್ಮ ಹೆಮ್ಮೆಯ ಭಾರತ" ಅಂಚೆ ಚೀಟಿಗಳು, ಜಗತ್ತಿನ ಅತಿ ಉದ್ದದ ಅಂಚೆ-ಚೀಟಿ, ಚರ್ಮದ, ಗ್ಲಾಸಿನ, ಪಿಂಗಣಿಯ ಅಂಚೆ ಚೀಟಿಗಳು, ಆಂಗ್ಲ ಭಾಷೆಯ ಸಾಹಿತಿಗಳ ಹಸ್ತಾಕ್ಷರಗಳು, ಇತ್ಯಾದಿ ಗಳನ್ನು ಬಹಳ ಎಚ್ಚರಿಕೆಯಿಂದ ಒಪ್ಪವಾಗಿ ಜೋಡಿಸಿ ಪ್ರತಿ ವಸ್ತುವಿನ ಬಗ್ಗೆ ಸಾಕಷ್ಟು ವಿವರಗಳೊಂದಿಗೆ ಪ್ರದರ್ಶಿಸಲಾಗಿತ್ತು.

## ಕರ್ನಾಟಕದ ರಾಷ್ಟ್ರಕವಿಗಳ ಕಿರು ಪರಿಚಯ

**ಮಂಜೇಶ್ವರ ಗೋವಿಂದ ಪೈ :** ಕರ್ನಾಟಕದ ಪ್ರಪ್ರಥಮ "ರಾಷ್ಟ್ರಕವಿ" ಯಾಗಿ ಪ್ರಸಿದ್ಧರಾಗಿದ್ದಾರೆ. ಕೇರಳದ ಮಂಜೇಶ್ವರಕ್ಕೆ ಭಾರತದ ಸಾಂಸ್ಕೃತಿಕ ಭೂಪಟದಲ್ಲಿ ಸ್ಥಾನ ಒದಗಿಸಿಕೊಟ್ಟವರು ಗೋವಿಂದ ಪೈ. ೧೯೫೬ರಲ್ಲಿ ರಾಜ್ಯ ಪುನರ್ ವಿಂಗಡಣೆಯಾದಾಗ ಕಾಸರಗೊಡು ಕೇರಳದ ಪಾಲಾಯಿತು, ಆಗ ಅವರು ಬಹಳ ಹಳಹಳಿಸಿದರು. ಗೋವಿಂದ ಪೈ ಕೊನೆಯ ತನಕ ತಮ್ಮ ಹೆಸರಿನೊಂದಿಗೆ ಮಂಜೇಶ್ವರವನ್ನು ಜೊತೆಗೂಡಿಸಿಕೊಂಡಿದ್ದರು.



ಎಂ.ಗೋವಿಂದ ಪೈ ಅವರು ಮಂಗಳೂರಿ ಸಾಹುಕಾರ ತಿಮ್ಮಪ್ಪ ಪೈ, ದೇವಕಿಯಮ್ಮಅವರ ಹಿರಿಯ ಸುಪುತ್ರ, ಅವರು ಕಾಸರಗೋಡು ತಾಲೂಕಿನ ಮಂಜೇಶ್ವರದ ಅಜ್ಜನ ಮನೆಯಲ್ಲಿ ಮಾರ್ಚ್ ೨೩. ೧೮೮೩ ದಂದು ಜನಿಸಿದರು. ಅವರ ಒಡನಾಡಿಗಳಲ್ಲಿ ಎಂ.ಎನ್.ಕಾಮತ್, ಡಾ.ಎಸ್. ರಾಧಾಕೃಷ್ಣನ್ ಕೆಲವರು ಅವರಿಗೆ ಪಾಠ ಕಲಿಸಿದ ಗುರುವರ್ಯರಲ್ಲಿ ಪಂಜೆ ಮಂಗೇಶರಾಯರೂ ಒಬ್ಬರು. ಬಿ.ಎ ಪದವಿಯಲ್ಲಿ ಇಂಗ್ಲೀಷ್ ವಿಷಯದಲ್ಲಿ ಉತ್ತಮ ಶ್ರೇಣಿಯಲ್ಲಿ ತೇರ್ಗಡೆಯಾಗಿದ್ದುದರಿಂದ ಚಿನ್ನದ ಪದಕನ್ನು ಗಳಿಸಿದರು. ಮೈಸೂರು ವಿಶ್ವವಿದ್ಯಾನಿಲಯ ಗೌರವ ಡಿಲಿಟ್ ಪದವಿಯನ್ನು ನಯವಾಗಿ ತಿರಸ್ಕರಿಸಿದವರು.

ಕಾಲೇಜಿನಲ್ಲಿದ್ದಾಗ ಲ್ಯಾಟಿನ್, ಫ್ರೆಂಚ್, ಸಂಸ್ಕೃತ, ಪಾಳಿ, ಬಂಗಾಲಿ ಸೇರಿ ಒಟ್ಟು ೨೫ ಭಾಷೆಗಳನ್ನು ಅಭ್ಯಸಿಸಿದ್ದರು, ಇವರ ಗ್ರಂಥಾಲಯದಲ್ಲಿ ೪೩ ಭಾಷೆಗಳ ಸಾವಿರಾರು ಗ್ರಂಥ ಸಂಗ್ರಹವಿತ್ತು. ಇವರ ಮಾತೃಭಾಷೆ ಕೊಂಕಣಿ, ಪರಿಸರದ ಭಾಷೆ ತುಳು, ರಕ್ತಗತವಾದ ಭಾಷೆಕನ್ನಡ. ಗೋವಿಂದ ಪೈಗಳು 'ಗಿಳಿವಿಂಡು', 'ನಂದಾದೀಪ' ಎಂಬ ಕಾವ್ಯ ಸಂಕಲನಗಳನ್ನು ಹೊರತಂದಿದ್ದಾರೆ, 'ವೈಶಾಖಿ' ಹಾಗು 'ಗೊಲ್ಗೊಥಾ' ಎನ್ನುವ ಎರಡು ಖಂಡಕಾವ್ಯಗಳನ್ನು 'ಹೆಬ್ಬೆರಳು' ಎನ್ನುವ ಪದ್ಯ, 'ಏಕಾಂತ' ನಾಟಕವನ್ನೂ,

‘ಚಿತ್ರಭಾನು’ ಎನ್ನುವ ಗದ್ಯನಾಟಕವನ್ನೂ ಬರೆದ್ದಾರೆ. ‘ತಾಯಿ’, ‘ಕಾಯಾಕ್ ಕೊಮಾಜಿ’ ಎಂಬ ಸಾಮಾಜಿಕ ನಾಟಕಗಳನ್ನು ಬರೆದದ್ದಲ್ಲದೆ, ಜಪಾನಿನ ‘ನೋ’ ನಾಟಕಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ, ಅನೇಕ ಪ್ರಬಂದಗಳನ್ನು ರಚಿಸಿದ್ದಾರೆ, ಕಾಲಮಾನದ ’ದೃಷ್ಟಿಯಿಂದ ಸೃಜನ, ಅವರ ಪೂರ್ವಾರ್ಧ ಜೀವನದ ಕೃಷೆ, ಸಂಶೋಧನ ಉತ್ತರಾರ್ಧ ಜೀವನದ ಕೃಷಿ.

೧೯೪೯ರಲ್ಲಿ ಮದರಾಸು ಸರ್ಕಾರವು ಇವರಿಗೆ ರಾಷ್ಟ್ರಕವಿ ಎಂದು ಸನ್ಮಾನ ನೀಡಿ ಗೌರವಿಸಿತು

೧೯೫೦ರಲ್ಲಿ ಮುಂಬಯಿಯಲ್ಲಿ ಜರುಗಿದ ೩೪ನೆಯ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಗೋವಿಂದ ಪೈಗಳು ಅಧ್ಯಕ್ಷರಾಗಿದ್ದರು.

## ಕುವೆಂಪು

‘ಕುವೆಂಪು’ ನಮ್ಮ ಸಾಹಿತ್ಯದ ಮೇರುಶಿಖರ. ಗೋವಿಂದ ಪೈಗಳು ಕನ್ನಡದ ಮೊದಲ ರಾಷ್ಟ್ರಕವಿಯಾದರೆ ಕುವೆಂಪು ವಿಶಾಲ ಕರ್ನಾಟಕದ ಮೊದಲ ರಾಷ್ಟ್ರ ಕವಿ. ಅಷ್ಟೇ ಅಲ್ಲ ನಮ್ಮಕಾಲದಲ್ಲಿ ಎಲ್ಲರಿಗಿಂತ ಮೊದಲು ಮಹಾಕಾವ್ಯ ರಚಿಸುವ ಮೂಲಕ ಹೊಸ ಕಾಲದ ಮೊದಲ ಮಹಾಕವಿ ಎನಿಸಿ ಕನ್ನಡಕ್ಕೆ ಮೊದಲ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ, ಮೊದಲ ಜ್ಞಾನಪೀಠ ಪ್ರಶಸ್ತಿ, ಮೊದಲ ಪಂಪ ಪ್ರಶಸ್ತಿಗಳಿಗೆ ಅತ್ಯಂತ ಅರ್ಹವಾಗಿಯೇ ಭಾಜನರಾಗಿ ಕನ್ನಡಕ್ಕೆ ಅನೇಕ ಮೊದಲುಗಳನ್ನು ಗಳಿಸಿಕೊಟ್ಟ ಧೀಮಂತ ಸಾಹಿತಿ. ಭಾವಗೀತೆ, ಮಹಾ ಕಾವ್ಯ, ಸಣ್ಣಕಥೆ, ಕಾದಂಬರಿ, ನಾಟಕ, ಸಾಹಿತ್ಯ ವಿಮರ್ಶೆ ಹೀಗೆ ಸಾಹಿತ್ಯದ ಬಹುತೇಕ ಎಲ್ಲ ಪ್ರಮುಖ ಪ್ರಕಾರಗಳಲ್ಲಿ ವೈವಿಧ್ಯಪೂರ್ಣವೂ, ಸತ್ವಪೂರ್ಣವೂ ಆದ ಕೃತಿಗಳನ್ನು ರಚಿಸುವುದಷ್ಟೇ ಅಲ್ಲದೆ ತಮ್ಮ ಯುಗ ಪ್ರವರ್ತನಕಾರಿ ವೈಚಾರಿಕ ಚಿಂತನೆಗಳಿಂದ ಕರ್ನಾಟಕದ ಜನತೆಯ ಮೇಲೆ ಬೀರಿದ ಪ್ರಭಾವ ಅತ್ಯದ್ಭುತವಾದದ್ದು. ಎಷ್ಟು ಮೊಗೆದರೂ ಬತ್ತದಂತಹ ನಿಧಿಯಂತಿರುವ ಅವರ ಸಾಹಿತ್ಯ ಸಮಸ್ತ ರೀತಿಯ ಆಲೋಚನೆಗೆ ಒಳಗು ಮಾಡಬಹುದಾದಷ್ಟು ಅಂತಃಸತ್ವವುಳ್ಳದ್ದು. ವಿಪುಲವಾದದ್ದು.



## ಡಾ.ಜಿ. ಎಸ್. ಶಿವರುದ್ರಪ್ಪ

ಕಾವ್ಯ, ಮೀಮಾಂಸೆ ಮತ್ತು ಸಾಹಿತ್ಯವಿಮರ್ಶೆಯ ಕ್ಷೇತ್ರಗಳಲ್ಲಿನ ತಮ್ಮ ಅನನ್ಯ ಸಾಧನೆಯ ಮೂಲಕ ಕನ್ನಡ ಸಾಹಿತ್ಯದಲ್ಲಿ ನಿಚ್ಚಳವಾದ ಹೆಜ್ಜೆಗುರುತುಗಳನ್ನು ಮೂಡಿಸಿರುವ ಜಿ. ಎಸ್. ಎಸ್. ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕರಾಗಿ ಕನ್ನಡ ಸಾಹಿತ್ಯಾಸಕ್ತರೆಲ್ಲ ಅದರತ್ತ ಒಮ್ಮೆ ತಿರುಗಿ ನೋಡುವ ಹಾಗೆ ಅದನ್ನು ಕಟ್ಟಿಬೆಳೆಸುವ ಪ್ರಕ್ರಿಯೆಯಲ್ಲಿ ಕನ್ನಡದ ತರುಣ ವಿಮರ್ಶಕರ ಪಡೆಯೊಂದು ರೂಪುಗೊಳ್ಳಲು ಕಾರಣರಾದವರು. ‘ಸಾಮಗಾನ’, ‘ದೇವಶಿಲ್ಪ’ ‘ದೀಪದ ಹೆಜ್ಜೆ’ ಮುಂತಾದ ಹನ್ನೊಂದು ಕವನ ಸಂಕಲನಗಳು ಜೀವ ಸಮೃದ್ಧ ಪ್ರಕೃತಿ ಮತ್ತು ಮಾನವಕೇಂದ್ರಿತ ಸಮಾಜಗಳ ಬಗೆಗಿನ ಅವರ ಅನುಭವಗಳ ಸುಂದರಕಾವ್ಯಾಭಿವ್ಯಕ್ತಿಗೆ ನಿದರ್ಶನವಾಗಿದೆ.



ದರೆ, ‘ಪರಿಶೀಲನ’, ‘ಗತಿಬಿಂಬ’, ‘ನವೋದಯ’, ’ಅನಾವರಣ’ ‘ಬೆಡಗು’ ಮೊದಲಾದ ವಿಮರ್ಶಾ ಸಂಕಲನಗಳು ಕನ್ನಡ ಸಾಹಿತ್ಯ ಪರಂಪರೆಯ ಅನನ್ಯವಾದ ಅಂಶಗಳನ್ನು ಹೊರತೆಗೆಯುವ ಸಾಹಸಕ್ಕೆ ಸಾಕ್ಷಿಗಳಾಗಿವೆ. ಅವರಿಗೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ದೊರಕಿಸಿಕೊಟ್ಟ ‘ಕಾವ್ಯಾರ್ಥಚಿಂತನ’ ಭಾರತೀಯ ಮತ್ತು ಪಾಶ್ಚಾತ್ಯ ಸಾಹಿತ್ಯ ಮೀಮಾಂಸೆಗಳ ವಿಧಾನಗಳ ತೌಲನಿಕ ವಿಶ್ಲೇಷಣೆಯ ಮಹತ್ವದ ಕೃತಿ. ನೃಪತುಂಗ ಪ್ರಶಸ್ತಿ, ಪಂಪ ಪ್ರಶಸ್ತಿ ಮತ್ತು ರಾಷ್ಟ್ರಕವಿ ಪ್ರಶಸ್ತಿಗಳಿಗೆ ಅತ್ಯಂತ ಅರ್ಹವಾಗಿಯೇ ಭಾಜನರಾಗಿರುತ್ತಾರೆ.

HONGANASU KANNADA MONTHLY
RNI No. KAR/KAN/2015/64049
REGISTERED
Post office Registration No.RNP/KA/BGS/2229/2018-2020
dt. 27-10-2017
Office of Posting: Bangalore PSO, Bangalore 560026
Price :Annual Subscription Rs. 20/-
Date of publishing and Posting : 30-08-2019

## ಕರ್ನಾಟಕ ಲೋಚನ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಪ್ರಕಟಿಸುವ ಷಾಣ್ಮಾಸಿಕ ವಿದ್ವತ್ ಪತ್ರಿಕೆ ಕರ್ನಾಟಕ ಲೋಚನ ಪತ್ರಿಕೆಗೆ ಸಾಹಿತ್ಯ-ಸಂಸ್ಕೃತಿಗೆ ಸಂಬಂಧಿಸಿದ ವಿಮರ್ಶಾತ್ಮಕ/ಸಂಶೋಧನಾತ್ಮಕ ಲೇಖನಗಳನ್ನು ವಿದ್ವಾಂಸರಿಂದ ಆಹ್ವಾನಿಸಿದೆ. ಲೇಖಕರು ತಮ್ಮ ಲೇಖನಗಳನ್ನು ಹಸ್ತಪ್ರತಿ ಅಥವಾ ಬೆರಳಚ್ಚು ರೂಪದಲ್ಲಿ ಪ್ರತಿಷ್ಠಾನದ ವಿಳಾಸಕ್ಕೆ ರವಾನಿಸಬಹುದು ಅಥವಾ bmsrilochana@gmail.comಗೆ ಈ ಮೈಲ್ ಮೂಲಕ ರವಾನಿಸಬಹುದು.

**Printed and published by** : B.R.Ravindranath on behalf of the BMSRI SMARAKA PRATISHTANA, 3rd Main Road, NR Colony, Bangalore - 560019 and printed at Annapoorneshwari Printers, No. 11, 10 ‘C’ Main, 6th Block, Rajajinagar, Bangalore 10. and published at BMSRI SMARAKA PRATISHTANA, 3rd Main Road, NR Colony, Bangalore - 560019 Editor : B.R.Ravindranath

**ಅಚ್ಚಾದ ಪುಸ್ತಕ** ತೆರೆದ-ಅಂಚೆ

ಶ್ರೀಮತಿ/ಶ್ರೀ..........................................................................

..........................................................................

..........................................................................

ವಿಳಾಸ
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೮೭೭